KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೦೯ (ವೈಶಾಖ ೧೦, ಶಕ ವರ್ಷ ೧೯೩೧) | ಸಂಚಿಕೆ ೧೮ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ನಗರಸಭೆ ಕಾರ್ಯಾಲಯ, ಸಾಗರ**

**ಅಧಿಸೂಚನೆ**

**ಕ್ರಮಾಂಕ:ನಸಾ:ಕಿಆನಿ:31\08–09, ದಿನಾಂಕ: 13ನೇ ಏಪ್ರಿಲ್ 2009**

**ವಿಷಯ:** ಉದ್ದಿಮೆ ಪರವಾನಗಿ ಶುಲ್ಕ ಪರಿಷ್ಕರಣೆ ಬಗ್ಗೆ

**ಉಲ್ಲೇಖ:** 1) ದಿನಾಂಕ:16–6–2008ರ ಸೋಮವಾರ ಬೆಳಿಗ್ಗೆ 11.00 ಘಂಟೆಗೆ ನಗರಸಭೆಯ ಸಭಾಂಗಣದಲ್ಲಿ ಅಧ್ಯಕ್ಷರಾದ ಶ್ರೀಯುತ ಟಿ.ಡಿ. ಮೇಘರಾಜ್‌ರವರ ಅಧ್ಯಕ್ಷತೆಯಲ್ಲಿ ನಡೆದ ಸಾಮಾನ್ಯ ಸಭೆಯ ನಡವಳಿಕೆಗಳು ವಿಷಯ ಸಂಖ್ಯೆ:168

2) ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ರವರ ಪ್ರಕಟಣೆ ದಿನಾಂಕ 12–03–2009

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಾಗರ ನಗರಸಭೆ ವ್ಯಾಪ್ತಿಯಲ್ಲಿರುವಂತಹ ಉದ್ದಿಮೆಗಳಿಗೆ ಪರವಾನಗಿ ಶುಲ್ಕವನ್ನು ಪರಿಷ್ಕರಣೆ ಮಾಡುವ ಬಗ್ಗೆ ಉಲ್ಲೇಖ(2) ರಂತೆ ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದ್ದು, ಯಾವುದೇ ಆಕ್ಷೇಪಣೆಗಳು ಸ್ವೀಕೃತಿಯಾಗಿರುವುದಿಲ್ಲ ಆದ್ದರಿಂದ ಈ ಕೆಳಕಂಡ ಪರಿಷ್ಕೃತ ದರಗಳು ದಿನಾಂಕ 01–04–2009 ರಿಂದ ಜಾರಿಗೆ ಬರುವಂತೆ ಅಧಿಸೂಚನೆ ಹೊರಡಿಸಿದೆ.

**ಉದ್ದಿಮೆ ಪರವಾನಿಗೆಯ ಪರಿಷ್ಕೃತ ದರಪಟ್ಟಿ**

| ಕ್ರ.ಸ | ಉದ್ದಿಮೆ ವಿವರಗಳು | ಪರಿಷ್ಕೃತ ದರ |
|---|---|---|
| 1 | ದಿನಸಿ ವ್ಯಾಪಾರ, ಅಂಗಡಿ | |
| | **ಚಿಕ್ಕ ಪ್ರಮಾಣ** | **300** |
| | **ದೊಡ್ಡ ಪ್ರಮಾಣ** | **500** |
| 2 | ಬೀಡಾ ಅಂಗಡಿ | **200** |
| 3 | ಜನರಲ್ ಸ್ಟೋರ್ಸ್, ಪ್ರಾವಿಜನ್ ಸ್ಟೋರ್ಸ್, ಸ್ಟೇಷನರಿ ಅಂಗಡಿ | **500** |
| 4 | ಸ್ವೀಟ್ಸ್ ಮತ್ತು ಕಾಂಡಿಮೆಂಟ್ಸ್ | **500** |
| 5 | ಬೇಕರಿ **ತಯಾರಿಕೆ ಮತ್ತು ಮಾರಾಟ** | **500** |
| | **ಮಾರಾಟ ಮಾತ್ರ** | **300** |

| ಕ್ರ.ಸ | ಉದ್ದಿಮೆ ವಿವರಗಳು | ಪರಿಷ್ಕೃತ ದರ |
|---|---|---|
| 6 | ಫ್ಯಾನ್ಸಿ ಸ್ಟೋರ್ಸ್, ಫ್ಯಾನ್ಸಿ ಆರ್ಟ್ಸ್ | **500** |
| 7 | ಗ್ರಂಥಿಗೆ ಅಂಗಡಿ | **250** |
| 8 | ಪಾನಿಪುರಿ ಅಂಗಡಿ, ಎಳನೀರು ಅಂಗಡಿ | **250** |
| 9 | ಹಣ್ಣುಗಳು ಮತ್ತು ತರಕಾರಿ ಮಾರಾಟ | **300** |
| 10 | ಹಳೆ ಪೇಪರ್, ಖಾಲಿ ಬಾಟಲಿ ಮಾರಾಟ | **250** |
| 11 | ಹೂವಿನ ಅಂಗಡಿ | **200** |
| 12 | ಬುಕ್ ಸ್ಟಾಲ್ ಹಾಗೂ ಶಾಲಾ ಪಠ್ಯ ಪುಸ್ತಕ ಅಂಗಡಿ | **500** |
| 13 | ಗಡಿಯಾರ **ರಿಪೇರಿ** | **200** |
| | **ದಾಸ್ತಾನು ಮತ್ತು ಮಾರಾಟ** | **500** |
| 14 | ರಬ್ಬರ್ ಹಾಗೂ ರಬ್ಬರ್ ವಸ್ತುಗಳ ಮಾರಾಟ | **250** |
| 15 | ಉಣ್ಣೆ ನೂಲು, ಹತ್ತಿ ನೂಲು, ಕೃತಕ ನೂಲು ಹಾಗೂ ದಾರದ ದಾಸ್ತಾನು ಮತ್ತು ಮಾರಾಟ | **250** |
| 16 | ಬಳೆ ಅಂಗಡಿ | **250** |
| 17 | ಪ್ಲಾಸ್ಟಿಕ್ ವಸ್ತುಗಳ ಮಾರಾಟ | **250** |
| 18 | ಗೃಹ ಕೈಗಾರಿಕೆ ಮತ್ತು ಮಾರಾಟ | **300** |
| 19 | ಕ್ಷೌರದ ಅಂಗಡಿಗಳು, ಸೆಲೂನ್‌ಗಳು | **200** |
| 20 | ಬ್ಯೂಟಿ ಪಾರ್ಲರ್‌ಗಳು | **500** |
| 21 | ಡ್ರೈ ಕ್ಲೀನಿಂಗ್, ಲಾಂಡ್ರಿ | **250** |
| 22 | ಟೈಲರಿಂಗ್ ಶಾಪ್ | **250** |
| 23 | ಎಸ್.ಟಿ.ಡಿ. &ಝೆರಾಕ್ಸ್ | **200** |
| 24 | ಕಬ್ಬಿಣದ ಕಮ್ಮಾರಿಕೆ | **200** |
| 25 | ಸೌದೆ ಹಾಗೂ ಇದ್ದಲಿನ ದಾಸ್ತಾನು, ಮಾರಾಟ | **200** |
| 26 | ಸುಣ್ಣ ತಯಾರಿಕೆ ಮತ್ತು ಮಾರಾಟ | **150** |
| 27 | ಕಂಬಾರಿಕೆ, ಚಮ್ಮಾರಿಕೆ, ಬಿದಿರಿನ ಸಾಮಗ್ರಿ ತಯಾರಿಕೆ | **200** |
| 28 | ತೆಂಗಿನ ನಾರಿನ ವಸ್ತುಗಳು, ಗೋಣಿ ಚೀಲಗಳು ಗೋಣಿನಾರು ಹಗ್ಗಗಳ ಮಾರಾಟ | **250** |
| 29 | ಹಾಸಿಗೆ, ದಿಂಬು ತಯಾರಿಕೆ ಮಾರಾಟ | **250** |
| 30 | ಆಡಿಯೋ, ವಿಡಿಯೋ ಸಿ.ಡಿ, ಕ್ಯಾಸೆಟ್ ಸಂಗ್ರಹ ಮತ್ತು ಮಾರಾಟ | **350** |
| 31 | ಕಾಫಿ ಪುಡಿ ಅಂಗಡಿ **ಮಾರಾಟ ಮತ್ತು ತಯಾರಿಕೆ** | **500** |
| | **ಮಾರಾಟ ಮಾತ್ರ** | **250** |
| 32 | ಹಣ್ಣಿನ ಜ್ಯೂಸ್ ಸೆಂಟರ್ | **300** |
| 33 | ಕಾಫಿ, ಟೀ ಸ್ಟಾಲ್ | **200** |
| 34 | ಉಪಹಾರ ಕ್ಯಾಂಟೀನ್, ಖಾನಾವಳಿ | **300** |
| 35 | ಹೋಟೇಲ್‌ಗಳು ( ಸಸ್ಯಹಾರಿ) **ಸಣ್ಣ ಪ್ರಮಾಣ** | **500** |
| | **ದೊಡ್ಡ ಪ್ರಮಾಣ** | **1000** |
| 36 | ಹೋಟೇಲ್‌ಗಳು (ಮಾಂಸಹಾರಿ) **ಸಣ್ಣ ಪ್ರಮಾಣ** | **750** |
| | **ದೊಡ್ಡ ಪ್ರಮಾಣ** | **1500** |
| 37 | ವಸತಿಗೃಹಗಳು, ಲಾಡ್ಜ್ **1ರಿಂದ 10 ಕೊಠಡಿ** | **500** |
| | **10ರಿಂದ ಮೇಲ್ಪಟ್ಟು** | **1000** |
| 38 | ಹಿಟ್ಟಿನ ಗಿರಣಿ (ಹಿಟ್ಟು ತಯಾರಿಕೆ ಮತ್ತು ಮಾರಾಟ) | |
| | **ಒಂದು ಯಂತ್ರಕ್ಕೆ** | **300** |
| | **ಒಂದಕ್ಕಿಂತ ಹೆಚ್ಚು** | **500** |

| ಕ್ರ.ಸ | ಉದ್ದಿಮೆ ವಿವರಗಳು | ಪರಿಷ್ಕೃತ ದರ |
|---|---|---|
| 39 | ಐಸ್ ಕ್ಯಾಂಡಿ, ಐಸ್ ಕ್ರೀಂ ತಯಾರಿಕೆ ಮತ್ತು ಮಾರಾಟ | **500** |
| 40 | ಪ್ಲೈವುಡ್, ಕಾರ್ಡ್ ಬೋರ್ಡ್ ಮಾರಾಟ | **500** |
| 41 | ಫೋಟೋ ಫ್ರೇಂ ಅಂಗಡಿ | **300** |
| 42 | ಗಾಜು, ಗಾಜಿನ ಉಪಕರಣಗಳ ಮಾರಾಟ | **500** |
| 43 | ಕನ್ನಡಕ ಅಂಗಡಿಗಳು | **300** |
| 44 | ಕೊರಿಯರ್ ಸರ್ವಿಸ್ | **300** |
| 45 | ಮುದ್ರಣಾಲಯ, ಪ್ರಿಂಟಿಂಗ್ ಪ್ರೆಸ್, ಆಫ್‌ಸೆಟ್ ಪ್ರಿಂಟಿಂಗ್ | **300** |
| 46 | ಚಪ್ಪಲಿ ಅಂಗಡಿಗಳು, ಷೂ ಕಾರ್ನರ್‌ಗಳು | **500** |
| 47 | ಚರ್ಮದ ಹಾಗೂ ತೊಗಲಿನ ದಾಸ್ತಾನುಮಾರಾಟ | **250** |
| 48 | ಕುಷನ್ ವರ್ಕ್ಸ್ | **300** |
| 49 | ರೇಡಿಯಂ ಕಟ್ಟಿಂಗ್ ಷಾಪ್ | **250** |
| 50 | ಚಿನ್ನ ಬೆಳ್ಳಿ ಅಂಗಡಿಗಳು (ತಯಾರಿಕೆ ಮತ್ತು ಮಾರಾಟ) | |
| | **ಚಿಕ್ಕ ಪ್ರಮಾಣ** | **400** |
| | **ದೊಡ್ಡ ಪ್ರಮಾಣ** | **500** |
| | **ರಿಪೇರಿ ಮಾತ್ರ** | **200** |
| | **ಆಭರಣ ಫಾಲಿಷ್** | **100** |
| 51 | ಕಂಪ್ಯೂಟರ್ ತರಬೇತಿ ಕೇಂದ್ರ ಹಾಗೂ ಇಂಟರ್‌ನೆಟ್ ಸರ್ವಿಸ್ | **500** |
| 52 | ಫರ್ನಿಚರ್ ಅಂಗಡಿ (ಪ್ಲಾಸ್ಟಿಕ್) | **500** |
| 53 | ಪೇಂಟ್ಸ್ ಅಂಗಡಿ( ಡಿಸ್ಟೆಂಪರ್ ಮತ್ತು ವಾರ್ನಿಷ್ ಸಹಿತ) | **500** |
| 54 | ಸಿಮೆಂಟ್ ಅಂಗಡಿಗಳು ದಾಸ್ತಾನು ಮಾರಾಟ | **750** |
| 55 | ಮೆಟಲ್ ಸ್ಟೋರ್ಸ್ (ತಾಮ್ರ, ಕಂಚು, ಹಿತ್ತಾಳೆ, ಸ್ಟೀಲ್ ಪಾತ್ರೆ ಸಂಗ್ರಹ ಮತ್ತು ಮಾರಾಟ) | |
| | **ಚಿಕ್ಕ ಪ್ರಮಾಣ** | **300** |
| | **ದೊಡ್ಡ ಪ್ರಮಾಣ** | **500** |
| 56 | ಕಬ್ಬಿಣ, ಉಕ್ಕಿನ ವಸ್ತುಗಳ ಸಂಗ್ರಹ ಮಾರಾಟ (ಕಬ್ಬಿಣ ಪೈಪ್, ತಂತಿಗಳು, ಉಕ್ಕಿನ ಹಾಳೆಗಳು) | |
| | **ಚಿಕ್ಕ ಪ್ರಮಾಣ** | **500** |
| | **ದೊಡ್ಡ ಪ್ರಮಾಣ** | **1000** |
| 57 | ಹಾರ್ಡ್‌ವೇರ್ ಅಂಗಡಿ | **1000** |
| 58 | ಸ್ಯಾನಿಟರಿ ಸಾಮಾನುಗಳು ದಾಸ್ತಾನು ಮತ್ತು ಮಾರಾಟ | **500** |
| 59 | ಸಿಮೆಂಟ್ ರಿಂಗ್, ಆಕೃತಿ ಕಂಬಗಳ ತಯಾರಿಕೆ ಮತ್ತು ಮಾರಾಟ | **500** |
| 60 | ಮರದ ಕೈ ಕೆತ್ತನೆ ಕೆಲಸ ( ಯಂತ್ರ ರಹಿತ) | **250** |
| 61 | ಮರದ ಪೀಠೋಪಕರಣಗಳು, ಗೃಹಬಳಕೆ ವಸ್ತುಗಳ ತಯಾರಿಕೆ ಮತ್ತು ಮಾರಾಟ | **500** |
| 62 | ಸಾಮಿಲ್‌ಗಳು | **1000** |
| 63 | ಮೆಡಿಕಲ್ ಷಾಪ್ | **500** |
| 64 | ಕ್ಲಿನಿಕ್‌ಗಳು | **500** |
| 65 | ನರ್ಸಿಂಗ್ ಹೋಂಗಳು | **1500** |
| 66 | ಮೆಡಿಕಲ್ ಲ್ಯಾಬೋರೇಟರಿ | **500** |
| 67 | ಆಯುರ್ವೇದಿಕ್ ಔಷಧಿಗಳ ಮಾರಾಟ | **500** |

| ಕ್ರ.ಸ | ಉದ್ದಿಮೆ ವಿವರಗಳು | ಪರಿಷ್ಕೃತ ದರ |
|---|---|---|
| 68 | ಫೋಟೋ ಸ್ಟುಡಿಯೋ ಡಿಜಿಟಲ್ ಸ್ಟುಡಿಯೋ | 500 |
| 69 | ಸೋಡಾ ಪಾನೀಯ, ತಂಪು ಪಾನೀಯ ಅಂಗಡಿ | |
| | **ತಯಾರಿಕೆ ಮತ್ತು ಮಾರಾಟ** | 500 |
| | **ಮಾರಾಟ ಮಾತ್ರ** | 200 |
| 70 | ಟ್ರೇಡಿಂಗ್ ಕಂಪನಿಗಳು, ಏಜನ್ಸೀಸ್ (ಗೃಹ ಬಳಕೆ<br>ಪ್ಲಾಸ್ಟಿಕ್ ಪಾಲಿಥಿನ್ ವಸ್ತುಗಳು, ಪೆಟ್ರೋಲಿಯಂ ಉತ್ಪನ್ನ, ಬೆಂಕಿ ಕಡ್ಡಿ ಪಟ್ಟಣಗಳು) | 750 |
| 71 | ಗೊಬ್ಬರ, ಕ್ರಿಮಿನಾಶಕ, ಬೀಜ ರಾಸಾಯನಿಕ ವಸ್ತುಗಳ ಸಂಗ್ರಹ ಮತ್ತು ಮಾರಾಟ | 750 |
| 72 | ಶುಂಠಿ ಕೈಗಾರಿಕೆ | 500 |
| 73 | ಧ್ವನಿ ವರ್ಧಕ, ವಿದ್ಯುತ್ ಅಲಂಕಾರಿಕ ಸಾಮಗ್ರಿಗಳು | 300 |
| 74 | ಶಾಮಿಯಾನ, ಅಡಿಗೆ ಸಾಮಾನುಗಳ ಅಂಗಡಿ | 500 |
| 75 | ಸ್ಫೋಟಕ ಪುಡಿ, ಬಂದೂಕಿನ ಮದ್ದು, ಗನ್ ವರ್ಕ್ಸ್ ಹಾಗೂ ಪಟಾಕಿ ಸಂಗ್ರಹ ಮತ್ತು ಮಾರಾಟ | 500 |
| 76 | ಡಿಶ್ ಹಾಗೂ ಕೇಬಲ್ ಸರ್ವಿಸಸ್ | 1000 |
| 77 | ಫೈನಾನ್ಸ್ ಏಜನ್ಸೀಸ್ | 500 |
| 78 | ಮನೆ ಕಟ್ಟಡ ಸಾಮಗ್ರಿಗಳ ಮಾರಾಟ (ಮರಳು, ಇಟ್ಟಿಗೆ, ಬಿದಿರಿನ ಬೊಂಬು, ಅಡಿಕೆ ಮಟ್ಟಿ) | 500 |
| 79 | ಕಲ್ಲು ಚಪ್ಪಡಿ ಮಾರಾಟ | 500 |
| 80 | ಮಾರ್ಬಲ್ಸ್, ಮೊಸಾಯಿಕ್ ಟೈಲ್ಸ್ ಮಾರಾಟ | 1000 |
| 81 | ಹೆಂಚುಗಳ ತಯಾರಿಕೆ ಮತ್ತು ಮಾರಾಟ | 500 |
| 82 | ಚಿತ್ರ ಮಂದಿರ | 2000 |
| 83 | ಸಿನಿಮಾ ವಿಡಿಯೋ ಹೌಸ್ | 1000 |
| 84 | ಕಲ್ಯಾಣ ಮಂಟಪ | 2000 |
| 85 | ಆಟೋಮೊಬೈಲ್ ಷಾಪ್ (ಬಿಡಿಭಾಗಗಳ ಮಾರಾಟ) | 500 |
| 86 | ವೆಲ್ಡಿಂಗ್ ಷಾಪ್, ಗ್ಯಾಸ್ ವೆಲ್ಡಿಂಗ್ | 250 |
| 87 | ವಾಟರ್ ಸರ್ವಿಸ್ ಸ್ಟೇಷನ್‌ಗಳು | 500 |
| 88 | ಆಟೋ ಗ್ಯಾರೇಜ್ (ದ್ವಿ–ಚಕ್ರ) **ಚಿಕ್ಕ ಪ್ರಮಾಣ** | 350 |
| | **ದೊಡ್ಡ ಪ್ರಮಾಣ** | 750 |
| 89 | ಆಟೋ ಗ್ಯಾರೇಜ್ (ನಾಲ್ಕು ಚಕ್ರ) | 1000 |
| 90 | ವಾಹನಗಳ ಷೋರೂಂ **ದ್ವಿ–ಚಕ್ರ ವಾಹನ** | 1000 |
| | **ಮೂರು, ನಾಲ್ಕು ಚಕ್ರ ವಾಹನ** | 1500 |
| | **ಟ್ರಾಕ್ಟರ್ ಷೋರೂಂ** | 2000 |
| 91 | ಟೈರ್ ರಿಟ್ರೇಡಿಂಗ್ **ಆಫೀಸ್** | 500 |
| | **ರಿಟ್ರೇಡಿಂಗ್ ವರ್ಕ್ಸ್** | 1000 |
| 92 | ಟ್ರಾನ್ಸ್ ಪೋರ್ಟ್ ಕಂಪನಿ(ಟೆಂಪೋ. ಲಾರಿ, ಬಸ್ ಬುಕ್ಕಿಂಗ್ ಆಫೀಸ್) | 1000 |
| 93 | ವಾಲ್ಕನೈಜಿಂಗ್, ಟೈರ್ ಪಂಕ್ಚರ್ ಅಂಗಡಿ | 250 |
| 94 | ಸೈಕಲ್ ಷಾಪ್ **ರಿಪೇರಿ** | 250 |
| | **ಮಾರಾಟ** | 500 |
| 95 | ಟಿ.ವಿ, ರೇಡಿಯೋ ಅಂಗಡಿ **ರಿಪೇರಿ** | 250 |
| | **ಮಾರಾಟ** | 500 |

| ಕ್ರ.ಸ | ಉದ್ದಿಮೆ ವಿವರಗಳು | ಪರಿಷ್ಕೃತ ದರ |
|---|---|---|
| 96 | ಎಲೆಕ್ಟ್ರಿಕಲ್ ಸ್ಟೋರ್ಸ್ | 350 |
| 97 | ಎಲೆಕ್ಟ್ರಿಕಲ್ ಸ್ವಿಚ್ ಬೋರ್ಡ್ ತಯಾರಿಕೆ | 500 |
| 98 | ಎಲೆಕ್ಟ್ರಿಕಲ್ ವಸ್ತುಗಳ ರಿಪೇರಿ ಅಂಗಡಿ | 250 |
| 99 | ಅಶ್ವ ಶಕ್ತಿ ಮೋಟಾರ್‌ಗಳ ದಾಸ್ತಾನು ಮತ್ತು ಮಾರಾಟ | 500 |
| 100 | ವಿದ್ಯುತ್ ಯಂತ್ರಗಳೊಂದಿಗೆ ವರ್ಕ್‌ಶಾಪ್, ಹಾಗೂ ಮೋಟಾರ್ ರಿವೈಂಡಿಂಗ್ | |
| | **ಚಿಕ್ಕ ಪ್ರಮಾಣ** | 250 |
| | **ದೊಡ್ಡ ಪ್ರಮಾಣ** | 500 |
| 101 | ಎಣ್ಣೆ ಮಿಲ್ಲುಗಳು | 500 |
| 102 | ಎಣ್ಣೆ ಸಗಟು ವ್ಯಾಪಾರ | 300 |
| 103 | ಬಟ್ಟೆ ಅಂಗಡಿಗಳು, ಸ್ಯಾರಿ ಹೌಸ್, ರೆಡಿಮೇಡ್ ಡ್ರೆಸಸ್ | |
| | **ಚಿಕ್ಕ ಪ್ರಮಾಣ** | 500 |
| | **ಮಧ್ಯಮ ಪ್ರಮಾಣ** | 750 |
| | **ದೊಡ್ಡ ಪ್ರಮಾಣ** | 1000 |
| 104 | ರೆಡಿಮೇಡ್ ಬಟ್ಟೆ ತಯಾರಿಕೆ | 500 |
| 105 | ರೈಸ್ ಮಿಲ್‌ಗಳು | 2000 |
| 106 | ಬಾರ್, ವೈನ್‌ಷಾಪ್ ಗಳು | 1500 |
| 107 | ಬಾರ್ ಮತ್ತು ರೆಸ್ಟೋರೆಂಟ್ | 2000 |
| 108 | ಮೊಟ್ಟೆ ವ್ಯಾಪಾರ, ಅಂಗಡಿ | 250 |
| 109 | ಮೀನು ಅಂಗಡಿ (ಹಸಿ ಹಾಗೂ ಒಣಮೀನು) | 500 |
| 110 | ಕೋಳಿ, ಬಾತುಕೋಳಿ ಮಾರಾಟ ಅಂಗಡಿ | 250 |
| 111 | ಕೋಳಿ ಮಾಂಸ ಮಾರಾಟ | 350 |
| 112 | ಕುರಿ, ಆಡು, ಮಾಂಸ ಮಾರಾಟ | 500 |
| 113 | ಡೀಸೆಲ್, ಪೆಟ್ರೋಲ್ ಬಂಕ್ | 1500 |
| 114 | ಅನಿಲಗಳು ಹಾಗೂ ಗ್ಯಾಸ್ ಸಿಲಿಂಡರ್ ದಾಸ್ತಾನು ಹಾಗೂ ಮಾರಾಟ | 1000 |
| 115 | ಮೊಬೈಲ್ ಷಾಪ್ | |
| | **ರಿಪೇರಿ** | 250 |
| | **ಮಾರಾಟ** | 500 |
| 116 | ಬಾಳೆಕಾಯಿ ಮಂಡಿ **ದಾಸ್ತಾನು ಹಾಗೂ ಮಾರಾಟ** | 300 |
| 117 | ಕೈಗಾರಿಕೆ, ಇಂಡಸ್ಟ್ರೀಸ್ **ಚಿಕ್ಕ ಪ್ರಮಾಣ** | 1000 |
| | **ದೊಡ್ಡ ಪ್ರಮಾಣ** | 1500 |
| 118 | ಗುಜರಿ ಅಂಗಡಿ | 350 |
| 119 | ಅಡಿಕೆ ಮಂಡಿ | 500 |
| 120 | ವ್ಹೀಲ್ಸ್ &ಡೀಲ್ಸ್ ಅಂಗಡಿ | 500 |
| 121 | ಷೇರು ವ್ಯವಹಾರ | 1000 |

**ಎಸ್. ಬಸವರಾಜು ಕೆ ಎಂ ಎ ಎಸ್**

ಪೌರಾಯುಕ್ತರು, ನಗರಸಭೆ, ಸಾಗರ

ಪಿ.ಡಿ. 10

**ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಾರ್ಯಾಲಯ : ನ್ಯಾಯಾಲಯ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ**

**ಭೂ ಸ್ವಾಧೀನ ಅಧಿನಿಯಮ 1894 ಪ್ರಕರಣ 16(2)ರ ಅನುಸಾರ ಪ್ರಕಟಣೆ**

**ಕ್ರಮಾಂಕ: ತುಂಮೇಯೋ ಎಲ್ಎಕ್ಯೂ ಸಿಆರ್ 4/2001–02, ದಿನಾಂಕ: 23ನೇ ಮಾರ್ಚ್ 2009**

ಭೂ ಸ್ವಾಧೀನ ಅಧಿನಿಯಮ ಪ್ರಕರಣ 16(1) (ಕರ್ನಾಟಕ ವಿಸ್ತರಣಾ ತಿದ್ದುಪಡಿ ಅಧಿನಿಯಮ 17:1961ರ ಪ್ರಕಾರ)ರ ಅನುಸಾರ ಅನುಸೂಚಿ ಜಮೀನುಗಳನ್ನು ತುಂಗಾ ಮೇಲ್ದಂಡೆ ಯೋಜನೆ ಮುಖ್ಯ ಕಾಲುವೆ ನಿರ್ಮಾಣದ ಸಾರ್ವಜನಿಕ ಉದ್ದೇಶಕ್ಕಾಗಿ ಭೂ ಸ್ವಾಧೀನ (ವಶ) ಪಡಿಸಿಕೊಂಡಿರುತ್ತದೆ ಎಂದು ಭೂ ಸ್ವಾಧೀನ ಅಧಿನಿಯಮ ಪ್ರಕರಣ 16(2) (ಕರ್ನಾಟಕ ವಿಸ್ತರಣಾ ತಿದ್ದುಪಡಿ ಅಧಿನಿಯಮ 17 : 1961ರ ಪ್ರಕಾರ) ಅನುಸಾರ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ಶಿವಮೊಗ್ಗ **ಹೋಬಳಿ:** ಮಂಡಗದ್ದೆ

**ತಾಲ್ಲೂಕು:** ತೀರ್ಥಹಳ್ಳಿ **ಗ್ರಾಮ:** ಬೊಮ್ಮನಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಸರ್ವೆ ನಂ. | ತರಹೆ | ಭೂ ಸ್ವಾಧೀನ ವಿಸ್ತೀರ್ಣ | ಆಕಾರ | ಮುಂಗಡ ಸ್ವಾಧೀನ ದಿನಾಂಕ | ಷರಾ |
|---|---|---|---|---|---|---|---|
| 1 | 1.ಶಂಕ್ರಮ್ಮ ಕೋಂ ನಾಗಪ್ಪಗೌಡ ಮತ್ತು ಮಕ್ಕಳು<br>2.ಹಿರಿಯಪ್ಪ ಗೌಡ ಬಿನ್ ಸಿದ್ದಪ್ಪಗೌಡ<br>3.ಮಂಜುನಾಥ ಬಿನ್ ಕೃಷ್ಣಯ್ಯಗೌಡ | 23 | ತರಿ | 0–10<br>0–10<br>0–11<br>0–31 | 4–11 | | |
| 2 | ಫಣಿಯಮ್ಮ ಕೋಂ ದುಗ್ಗಪ್ಪ ಹೆಗ್ಡೆ<br>ಪೌತಿ ಸಬೂಬು ಮಗ ಎ.ಡಿ.ದೇವೇಂದ್ರ ಹೆಗ್ಡೆ | 25 | ತರಿ | 0–23 | 2–15 | | |
| 3 | ಡಾಕಪ್ಪ ಗೌಡ ಬಿನ್ ಚಿನ್ನಯ್ಯಗೌಡ | 34 | ಖುಷ್ಕಿ | 1–02 | 0–30 | | |
| | | | **ಜುಮ್ಲಾ** | **2–16** | **6–56** | | |

ವಿಶೇಷ ಭೂ ಸ್ವಾಧೀನಾಧಿಕಾರಿಗಳು,
ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ.

ಪಿ.ಆರ್. 158

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(ಎನ್.ಎ)(109) ಸಿ.ಆರ್:18/08–09, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2009**

**ವಿಷಯ:** ಶ್ರೀ ಕೃಷ್ಣರಾಜೇಂದ್ರ ಚಾರಿಟಬಲ್ ಟ್ರಸ್ಟ್, ಬೆಂಗಳೂರು ಪ್ಯಾಲೇಸ್ ಕಾಂಪೌಂಡ್, ಜಯಮಹಲ್ ರೋಡ್, ಬೆಂಗಳೂರು ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಅರಕೆರೆ ಗ್ರಾಮದ ಸ.ನಂ. 244 ರಲ್ಲಿ 1–24 ಎಕರೆ:ಗುಂಟೆ ಮತ್ತು ಸ.ನಂ. 245 ರಲ್ಲಿ 1–26 ಎಕರೆ:ಗುಂಟೆ ಒಟ್ಟು 3–10 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಕೃಷ್ಣರಾಜೇಂದ್ರ ಚಾರಿಟಬಲ್ ಟ್ರಸ್ಟ್, ಬೆಂಗಳೂರು ಪ್ಯಾಲೇಸ್ ಕಾಂಪೌಂಡ್, ಜಯಮಹಲ್ ರೋಡ್, ಬೆಂಗಳೂರು ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಅರಕೆರೆ ಗ್ರಾಮದ ಸ.ನಂ. 244 ರಲ್ಲಿ 1–24 ಎಕರೆ:ಗುಂಟೆ ಮತ್ತು ಸ.ನಂ.245 ರಲ್ಲಿ 1–26 ಎಕರೆ:ಗುಂಟೆ ಒಟ್ಟು 3–10 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ: ಎಲ್.ಆರ್.ಎಫ್:ಸಿ.ಆರ್: 147/08–09, ದಿನಾಂಕ: 9.1.2009 ರಲ್ಲಿ ಪ್ರಸ್ತಾವಿತ ಅರಕೆರೆ ಗ್ರಾಮದ ಸ.ನಂ. 244 ರಲ್ಲಿ 1–24 ಎಕರೆ:ಗುಂಟೆ ಮತ್ತು ಸ.ನಂ.245 ರಲ್ಲಿ 1–26 ಎಕರೆ:ಗುಂಟೆ ಒಟ್ಟು 3–10 ಎಕರೆ:ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: 280/1989–90, ದಿನಾಂಕ: 1.12.1989 ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಅರಕೆರೆ ಗ್ರಾಮದ ಸ.ನಂ. 244 ರಲ್ಲಿ 1–24 ಎಕರೆ:ಗುಂಟೆ ಮತ್ತು ಸ.ನಂ.245 ರಲ್ಲಿ 1–26 ಎಕರೆ:ಗುಂಟೆಗೆ ಈ ಕಛೇರಿ ಅಧಿಕೃತ ಪತ್ರ ಸಂಖ್ಯೆ: ಪಿ.ಟಿ.ಸಿ.ಎಲ್ (ಎನ್.ಎ) ಸಿ.ಆರ್:21/06–07 ಮತ್ತು 22/06–07, ದಿನಾಂಕ: 12.7.2007 ರಂದು ಜಮೀನನ್ನು ಪಿ.ಟಿ.ಸಿ.ಎಲ್ ಕಾಯ್ದೆಯಡಿಯಲ್ಲಿ ಮಾರಾಟ ಮಾಡಲು ಕ್ರಯದಾರರು ಅನುಮತಿ ಪಡೆದಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ(ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಅರಕೆರೆ ಗ್ರಾಮದ ಸ.ನಂ. 244 ರಲ್ಲಿ 1–24 ಎಕರೆ:ಗುಂಟೆ ಮತ್ತು ಸ.ನಂ.245 ರಲ್ಲಿ 1–26 ಎಕರೆ:ಗುಂಟೆ ಒಟ್ಟು 3–10 ಎಕರೆ:ಗುಂಟೆ ಜಮೀನನ್ನು ಶ್ರೀ ಕೃಷ್ಣರಾಜೇಂದ್ರ ಚಾರಿಟಬಲ್ ಟ್ರಸ್ಟ್, ಬೆಂಗಳೂರು ಪ್ಯಾಲೇಸ್ ಕಾಂಪೌಂಡ್, ಜಯಮಹಲ್ ರೋಡ್, ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (1) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ಪಟ್ಟಿ ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್. 159 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯ್ದೆ ಕಲಂ 6 ರ ಅನ್ವಯ ಘೋಷಣೆ**

**ಅಧಿಸೂಚನೆ ಸಂಖ್ಯೆ ಕಂಇ 29 ಭೂಸ್ವಾಬೆ 09, ದಿನಾಂಕ: 17ನೇ ಏಪ್ರಿಲ್ 2009**

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನುಗಳು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಉತ್ತರಹಳ್ಳಿ ಗ್ರಾಮದ ಸರ್ವೆ ನಂ 113 ರಲ್ಲಿ 0–03 ಗುಂಟೆ ಜಮೀನನ್ನು ರಸ್ತೆ ವಿಸ್ತರಣೆಗಾಗಿ ಬೇಕಾಗಬಹುದೆಂದು ಲೋಕೋಪಯೋಗಿ ಇಲಾಖೆಯವರು ಪ್ರಸ್ತಾವನೆಯನ್ನು ಸಲ್ಲಿಸಿರುವುದರ ಮೇರೆಗೆ ಬೆಂಗಳೂರು ವಿಶೇಷ ಜಿಲ್ಲಾಧಿಕಾರಿಗಳವರ ಕ್ರಮಾಂಕ ಎಲ್‌ಎಕ್ಯು ಎಸ್‌ಆರ್ 4:08–09 ದಿನಾಂಕ: 14.11.2008 ಮೇರೆಗೆ ಕರ್ನಾಟಕ ರಾಜ್ಯಪತ್ರದ ದಿನಾಂಕ: 1.1.2009 ಭಾಗ 6 ರಲ್ಲಿ ಪ್ರಕಟವಾಗಿರುವ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದ 1961ನೇ ಸಾಲಿನ ಕರ್ನಾಟಕ ಅಧಿನಿಯಮ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮ 5ಎ(2)ರ ಪ್ರಕರಣದ ಮತ್ತು 6(1)ರ ಪ್ರಕರಣದ ಮೇರೆಗೆ ವಿಶೇಷ ಜಿಲ್ಲಾಧಿಕಾರಿಯವರು ಮೇಲೆ ಹೇಳಿದ ಉದ್ದೇಶಕ್ಕಾಗಿ ಸದರಿ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಭೂ ಸಂಗ್ರಹಣಾ ಅಧಿನಿಯಮದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಅಗತ್ಯವಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂ ಸಂಗ್ರಹಣ ಅಧಿನಿಯಮ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಬೆಂಗಳೂರು–1 ಇವರನ್ನು ಸದರಿ ಜಮೀನುಗಳ ಬಗ್ಗೆ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಯವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಈ ಮೂಲಕ ನಿಯಮಿಸಲಾಗಿದೆ. ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣಾ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನುಗಳ ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, ಬೆಂಗಳೂರು–1 ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು **ತಾಲ್ಲೂಕು:** ದಕ್ಷಿಣ **ಹೋಬಳಿ:** ಉತ್ತರಹಳ್ಳಿ **ಗ್ರಾಮ:** ಉತ್ತರಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನಕ್ಕೆ ಬೇಕಾದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ |
| 1. | ಶ್ರೀ ವಸಂತಕುಮಾರ್, ಸಚ್ಚಿದಾನಂದಮೂರ್ತಿ, ಶಾಂತಮಣಿ, ಶಾರದಮಣಿ | ಸದರ | 113 | ಖುಷ್ಕಿ | ಸನಂ 1 | ರಸ್ತೆ | ಸ ನಂ 13ರ ಉಳಿಕೆ ಜಮೀನು | ರಸ್ತೆ ಮತ್ತು ಊರು | 0–03 | 3–00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 170